# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1510
ಸದಸ್ಯರ ಹೆಸರು : ಶ್ರೀಮತಿ ಭಾರತಿ ಶೆಟ್ಟಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ, ರಾಮನಗರ , ಮೈಸೂರು, ಬೀದರ ಮತ್ತು ಕಲುಬುರ್ಗಿ ಜಿಲ್ಲೆಗಳು ಮತ್ತು ಬೆಂಗಳೂರಿನಲ್ಲಿ ಇರಬಹುದಾದ Sleeper Cell ಗಳನ್ನು ಗುರುತಿಸಲು ಸರ್ಕಾರ ವ್ಯವಸ್ಥೆಯನ್ನು ಮತ್ತಷ್ಟು ಸಧೃಡಗೊಳಿಸಲು ನಡೆದಿರುವ ಪ್ರಯತ್ನಗಳೇನು; | 1) ಭಯೋತ್ಪಾದಕ ಚಟುವಟಿಕೆಯನ್ನು ಪರಿಣಾಮಕಾರಿಯಾಗಿ ನಿಗ್ರಹಿಸಲು ಪ್ರತ್ಯೇಕವಾಗಿ ಅಂತರಿಕ ಭದ್ರತೆ ವಿಭಾಗ (ISD) ರಚನೆಯಾಗಿರುತ್ತದೆ.<br>2) ಗರುಡ ಕಮಾಂಡೋ ಪಡೆಯನ್ನು (CCT) ರಚನೆ ಮಾಡಿದ್ದು, ಭಯೋತ್ಪಾದಕ ದಾಳಿಯನ್ನು ಎದುರಿಸಲು ಸನ್ನದ್ದುಗೊಳಿಸಲಾಗಿದೆ.<br>3) ಭಯೋತ್ಪಾದಕ ಚಟುವಟಿಕೆಯನ್ನು ನಿಗ್ರಹಿಸಲು ಮತ್ತು ದಾಳಿಯನ್ನು ಎದುರಿಸಲು ಯುವ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಆಧುನಿಕ ಶಸ್ತ್ರಾಸ್ತ್ರಗಳ ಬಳಕೆ ಹಾಗೂ ಇನ್ನಿತರೆ ವಿಷಯಗಳಿಗೆ ಸೂಕ್ತ ತರಬೇತಿ ನೀಡಲಾಗುತ್ತಿದೆ. |
| ಆ | ಕೇರಳದಲ್ಲಿ ನಡೆಯುತ್ತಿರುವ ಐ.ಎಸ್.ಐ.ಎಸ್. ನೇಮಕಾತಿಗಳನ್ನು ನಮ್ಮ ರಾಜ್ಯದಲ್ಲಿ ಪ್ರತಿಬಂಧಿಸಲು ಸರ್ಕಾರದ ಪ್ರಯತ್ನಗಳೇನು; | ಉಗ್ರ ಚಟುವಟಿಕೆಗಳ ಬಗ್ಗೆ ನಿಗಾಯಿಡುವ ಸಂಬಂಧ ಆಂತರಿಕ ಭದ್ರತಾ ವಿಭಾಗದ ಡಿಎಸ್‌ಪಿ ದರ್ಜೆಯ ಅಧಿಕಾರಿಗಳ ನೇತೃತ್ವದಲ್ಲಿ ಐಎಸ್‌ಐಎಸ್ ಮಾಡ್ಯೂಲ್‌ಗೆ ತಂಡವನ್ನು ರಚಿಸಿದ್ದು. ಸದರಿ ತಂಡವು ಈವರೆಗೂ ಭಾರತ ದೇಶದಲ್ಲಿ ದಾಖಲಾಗಿರುವ ಹಾಗೂ ವಿಶೇಷವಾಗಿ ಕೇರಳದಲ್ಲಿ ಹೆಚ್ಚಿನ ಪ್ರಕರಣಗಳು ದಾಖಲಾದ ನಿಮಿತ್ತ ಸದರಿ ಪ್ರಕರಣಗಳ ಆರೋಪಿಗಳನ್ನು ಕರ್ನಾಟಕ ರಾಜ್ಯದ ಅಧಿಕಾರಿಗಳು ಸಹ ವಿಚಾರಣೆಯನ್ನು ನಡೆಸಿ ಸದರಿ ಆರೋಪಿಗಳೊಂದಿಗೆ ನಂಟು ಹೊಂದಿರುವ ಪ್ರಾಥಮಿಕ ಹಾಗೂ ದ್ವಿತೀಯ ಸಂಪರ್ಕ ಹೊಂದಿರುವ ವ್ಯಕ್ತಿಗಳ ಮಾಹಿತಿಯನ್ನು ಸಂಗ್ರಹಿಸಿದ್ದು, ಅಂತಹ ವ್ಯಕ್ತಿಗಳ ಮೇಲೆ ನಿಗಾಯಿಡಲಾಗಿದೆ ಹಾಗೂ ಕೇಂದ್ರ ಮತ್ತು ರಾಜ್ಯ ಗುಪ್ತಚರ ಇಲಾಖೆಗಳೊಂದಿಗೆ ಸದರಿ ಮಾಹಿತಿಯನ್ನು ಹಂಚಿಕೊಂಡು ಸತತವಾಗಿ ನಿಗಾಯಿಡಲಾಗಿರುತ್ತದೆ. |
| ಇ | ಬೆಂಗಳೂರುರಿನಲ್ಲಿ ಶಾಸಕರ ಮನೆಗೆ ಬೆಂಕಿ ಹಚ್ಚಿದ ಪ್ರಕರಣದ ಹಿನ್ನೆಲೆಯಲ್ಲಿ ಇತರ ದೇಶ ವಿರೋಧಿ ಚಟುವಟಿಕೆಗಳನ್ನು ಸರ್ಕಾರ ಗುರುತಿಸಿದೆಯೇ; (ವಿವರ ನೀಡುವುದು) | ಪ್ರಸ್ತುತ ಈ ಪ್ರಕರಣದ ತನಿಖೆಯನ್ನು ರಾಷ್ಟ್ರೀಯ ತನಿಖಾ ಸಂಸ್ಥೆಯಿಂದ ತನಿಖೆ ನಡೆಸುತ್ತಿದ್ದು, ದೇಶ ವಿರೋಧಿ ಚಟುವಟಿಕೆಗಳಲ್ಲಿ ಭಾಗಿಯಾಗುವವರ ಬಗ್ಗೆ ನಿಗವಹಿಸಲಾಗುತ್ತಿದೆ. |
| ಈ | ಕೇರಳದಲ್ಲಿ ನಡೆಯುತ್ತಿರುವ ವಿವಿಧ ರೀತಿಯ ಚಟುವಟಿಕೆಗಳನ್ನು ಕುರಿತು ಸರ್ಕಾರ ಗುರುತಿಸಿರುವ ಬಹಿರಂಗ ಪಡಿಸಬಹುದಾದ ಮಾಹಿತಿಗಳು ಯಾವುವು? (ವಿವರ ಒದಗಿಸುವುದು) | ಕೇರಳ ರಾಜ್ಯದಲ್ಲಿ ನಡೆಯುತ್ತಿರುವ ವಿವಿಧ ರೀತಿಯ ಚಟುವಟಿಕೆಗಳನ್ನು ಸರ್ಕಾರ ಗುರುತಿಸಿದ್ದು, ಈ ಬಗ್ಗೆ ನಿಗಾವಹಿಸಲಾಗಿದೆ. |

ಹೆಚ್‌ಡಿ 189 ಎಸ್‌ಎಸ್‌ಟಿ 2021

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ
ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು